ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ಬೀಡಿ ಕಾರ್ಮಿಕರ ಕುರಿತು

ಶ್ರೀ ಐವನ್ ಡಿ' ಸೋಜಾ (ನಾಮನಿರ್ದೇಶನ ಹೊಂದಿದವರು) :-

410 (538) ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತ ಇರುವ ಬೀಡಿ ಕಾರ್ಮಿಕರ ಸಂಖ್ಯೆ ಎಷ್ಟು ; ಜಿಲ್ಲೆಯ ಯಾವ ಯಾವ ಭಾಗಗಳಲ್ಲಿ ಇದ್ದಾರೆ ; (ವಿವರ ನೀಡುವುದು)

(ಆ) ಬೀಡಿ ಕಾರ್ಮಿಕರು ಉದ್ಯೋಗ ಕಳೆದುಕೊಳ್ಳುವ ಭೀತಿಯಲ್ಲಿದ್ದು, ಈ ಬಗ್ಗೆ ಪರ್ಯಾಯ ಯೋಜನೆ ಸರ್ಕಾರದ ಮುಂದಿದೆಯೇ ; (ವಿವರ ನೀಡುವುದು)

(ಇ) ಬೀಡಿ ಕಾರ್ಮಿಕರಿಗೆ ಬೋನಸ್ ಮತ್ತು ತುಟ್ಟಿಭತ್ಯೆ ಪಾವತಿಸದೆ ಮಾಲೀಕರು ತೊಂದರೆ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಈ ಬಗ್ಗೆ ಕೈಗೊಂಡ ಕ್ರಮಗಳೇನು ; (ವಿವರ ನೀಡುವುದು)

(ಈ) ಬೀಡಿ ಕಾರ್ಮಿಕರಿಗೆ ಪ್ರತ್ಯೇಕ ವಸತಿ ನಿವೇಶನಗಳನ್ನು ನೀಡಲು ಸರ್ಕಾರ ಕ್ರಮ ಕೈಗೊಳ್ಳುವುದೇ ?